ಶ್ರೀಮನ್ಮಧ್ವಾಚಾರ್ಯರ ಮೂಲಗ್ರಂಥಗಳ ಮಾಲಿಕೆಯಲ್ಲಿ

# ಸಂಕೀರ್ಣ ಗ್ರಂಥಗಳು

(ಅಣುಭಾಷ್ಯ, ದ್ವಾದಶಸ್ತೋತ್ರ, ಜಯಂತೀನಿರ್ಣಯ, ಶ್ರೀಕಂದುಕಸ್ತುತಿ, ಶ್ರೀಕೃಷ್ಣಾಮೃತಮಹಾರ್ಣವ, ನಖಸ್ತುತಿ, ತಂತ್ರಸಾರ, ಯಮಕಭಾರತ, ಕರ್ಮನಿರ್ಣಯ, ಸದಾಚಾರಸ್ಮೃತಿ)




ಕನ್ನಡ ಟೀಕಾ ಭಾಷಾಂತರ

ವೇದಮೂರ್ತಿ ದ್ವೈತವೇದಾಂತವಾಚಸ್ಪತಿ

**ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳು**

॥ ಶ್ರೀಮಧ್ವನಾಥೋ ವಿಜಯತೇ ॥

## ಶ್ರೀಮನ್ಮಧ್ವಾಚಾರ್ಯರ

ಮೂಲಗ್ರಂಥಗಳ ಮಾಲಿಕೆಯಲ್ಲಿ

# ಸಂಕೀರ್ಣ ಗ್ರಂಥಗಳು

(ಅಣುಭಾಷ್ಯ, ದ್ವಾದಶಸ್ತೋತ್ರ, ಜಯಂತೀನಿರ್ಣಯ, ಶ್ರೀಕಂದುಕಸ್ತುತಿ,
ಶ್ರೀಕೃಷ್ಣಾಮೃತಮಹಾರ್ಣವ, ನಖಸ್ತುತಿ, ತಂತ್ರಸಾರ, ಯಮಕಭಾರತ,
ಕರ್ಮನಿರ್ಣಯ, ಸದಾಚಾರಸ್ಮೃತಿ)

ದ್ವೈತವೇದಾಂತವಿದ್ವಾನ್, ದ್ವೈತವೇದಾಂತಶಿರೋಮಣಿ ವೇದಾಂತವಾಚಸ್ಪತಿ,
ಉಡುಪಿ ಸಂಸ್ಕೃತಮಹಾಪಾಠಶಾಲಾನಿವೃತ್ತ ವೇದಾಂತಪ್ರಾಚಾರ್ಯ

**ದಿ॥ ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳಿಂದ**

ರಚಿತವಾದ ಕನ್ನಡ ಟೀಕಾ ಭಾಷಾಂತರ ಸಹಿತ

ಪ್ರಕಾಶಕರು

**ಶ್ರೀಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲ ಮಹಾಸಂಸ್ಥಾನ**
**ಶ್ರೀಶ್ರೀಪಾದರಾಜಮಠ, ಮುಳಬಾಗಿಲು**

|| ಶ್ರೀಃ ||

# ಶ್ರೀಕೃಷ್ಣಸ್ತುತಿಯು

ಶ್ರೀಮದ್ಧನುಮದ್ಭೀಮ ಮಧ್ವಾಂತರ್ಗತ ರಾಮಕೃಷ್ಣ ವೇದವ್ಯಾಸಾತ್ಮಕ
ಲಕ್ಷ್ಮೀಹಯಗ್ರೀವಾಯ ನಮಃ || ಹರಿಃ ಓಂ ||

★ ಮೂಲ || ಅಂಬರಗಂಗಾ ಚುಂಬಿತ ಪಾದಃ;
ಪದತಲ ವಿದಲಿತ ಗುರುತರ ಶಕಟಃ ।
ಕಾಲಿಯನಾಗ ಕ್ಷ್ವೇಲನಿಹಂತಾ
ಸರಸಿಜ ನವ ದಲ ವಿಕಸಿತ ನಯನಃ || ೧ ||
ಕಾಲಘನಾಲೀ ಕರ್ಬುರ ಕಾಯಃ
ಶರಶತ ಶಕಲಿತ ಸುರರಿಪು ನಿವಹಃ ।
ಸಂತತಮಸ್ಮಾನ್ಪಾತು ಮುರಾರಿಃ
ಸತತಗ ಸಮಜವ ಖಗಪತಿ ನಿರತಃ || ೨ ||

ಅರ್ಥ || ಅಂಬರಗಂಗಾ ಚುಂಬಿತಪಾದಃ=ಆಕಾಶಗಂಗೆಯಿಂದ ಚೆನ್ನಾಗಿ ಸಂಬದ್ಧಗಳಾದ ಚರಣಗಳುಳ್ಳ, ಪದತಲವಿದಲಿತಗುರುತರಶಕಟಃ=ಪಾದತಲದಿಂದ ನಾಶಮಾಡಲ್ಪಟ್ಟ ಅತಿ ದೊಡ್ಡ ಬಂಡಿಯುಳ್ಳ (ಹೆಚ್ಚು ಪರಾಕ್ರಮಶಾಲಿಯಾದ ಶಕಟಾಸುರನುಳ್ಳ), ಕಾಲಿಯನಾಗಕ್ಷ್ವೇಲ ನಿಹಂತಾ=ಕಾಳಿಂಗ ಸರ್ಪನ ವಿಷವನ್ನು ನಾಶಮಾಡಿದವನೂ, ಸರಸಿಜ ನವ ದಲ ವಿಕಸಿತ ನಯನಃ=ಕಮಲದ ನೂತನವಾದ ದಳದಂತೆ ಅರಳಿದ ಕಣ್ಣುಗಳುಳ್ಳವನು, ಕಾಲಘನಾಲೀಕರ್ಬುರಕಾಯಃ=ಶ್ಯಾಮವಾದ ಮೇಘಗಳ ಪಙ್ತಿಯಂತೆ ಮಿಶ್ರವಾದ ಶರೀರವುಳ್ಳವನು, ಶರಶತಶಕಲಿತಸುರರಿಪುನಿವಹಃ=ಬಾಣಗಳ ಸಮೂಹದಿಂದ ನಾಶಮಾಡಲ್ಪಟ್ಟ ದೇವದ್ವೇಷಿಗಳಾದ ದೈತ್ಯರ ಸಮೂಹಗಳುಳ್ಳವನು, ಸತತಗ ಸಮಜವ ಖಗಪತಿನಿರತಃ=ಸದಾಗಮನವುಳ್ಳ ವಾಯು ದೇವರಿಗೆ ಸದೃಶವಾದ ವೇಗವುಳ್ಳ ಹಕ್ಕಿಗಳಿಗೆ ಅಧಿಪತಿಯಾದ ಗರುಡನಲ್ಲಿ ಆಸಕ್ತನಾದ, ಮುರಾರಿಃ=

---

★ "ಶ್ರೀವ್ಯಾಸರಾಜ ಶ್ರೀಮಚ್ಚರಣರು ಗ್ರಂಥಮಾಲಿಕಾ ಸ್ತೋತ್ರದಲ್ಲಿ 'ಗ್ರಂಥಾನ್ಮಧ್ವಶ್ಚಕಾರಾಸೌ ಸಪ್ತತ್ರಿಂಶದಮಂದಧೀಃ । ಗೀತಾಭಾಷ್ಯಂ ವಿಧಾಯಾಸೌ ಪ್ರಥಮಂ ತುಷ್ಟಿದಂ ಹರೇಃ ||" ಇತ್ಯಾದಿ. ಶ್ರೀಮದಾಚಾರ್ಯರು ಗೀತಾಭಾಷ್ಯ ಮೊದಲಾದ (೩೭) ಮೂವತ್ತೇಳು ಗ್ರಂಥಗಳನ್ನು ಮಾಡಿರುವರು" ಎಂದು ಹೇಳಿರುವರು. ಆ ಮೂವತ್ತೇಳು ಗ್ರಂಥಗಳಲ್ಲಿ ಈ ಕೃಷ್ಣಸ್ತುತಿಯು ಸೇರಲಿಲ್ಲ. ಆದರೂ ಶ್ರೀಮದಾಚಾರ್ಯರು ಬಾಲ್ಯಾವಸ್ಥೆಯಲ್ಲಿ ವಯಸ್ಕರೊಡನೆ ಚೆಂಡು ಆಟ ವಗ್ಯರೆ ಮಾಡುವಾಗ ಈ ಗ್ರಂಥವನ್ನು ಮಾಡಿದ್ದಾರೆಂದು ಐತಿಹ್ಯವಿದ್ದುದರಿಂದಲೂ, ಕುಂಭಕೋಣ ಬೆಳಗಾಮ್‌ಗಳಲ್ಲಿ ಸರ್ವಮೂಲದೊಂದಿಗೆ ಮೊದಲೇ ಮುದ್ರಿತವಾಗಿರುವುದರಿಂದಲೂ ನಾವು ಇದರೊಂದಿಗೆ ಸೇರಿಸಿರುತ್ತೇವೆ. ಈ ಕೃಷ್ಣಸ್ತುತಿಯನ್ನು ಕಂದುಕಸ್ತುತಿಯೆಂದೂ ಕೆಲವರು ಅನ್ನುವರು. ಆದಕಾರಣ ಶ್ರೀಮದಾಚಾರ್ಯರು (೩೭) ಮೂವತ್ತೇಳು ಗ್ರಂಥಗಳನ್ನು ಮಾಡಿದ್ದಲ್ಲ, ಇನ್ನೂ ಅನೇಕ ಗ್ರಂಥಗಳನ್ನು ಮಾಡಿದ್ದಿರಬಹುದು. ಅತ್ಯಂತ ಪ್ರಧಾನ ಗ್ರಂಥಗಳನ್ನು ಮಾತ್ರ ಶ್ರೀವ್ಯಾಸರಾಜ ಶ್ರೀಮಚ್ಚರಣರು ಗಣನಮಾಡಿ ಹೇಳಿರುವರು. ಎಂದೂ ಊಹಿಸುತ್ತೇವೆ.

ಮುರಾಸುರನಿಗೆ ಶತ್ರುವಾದ ಶ್ರೀಕೃಷ್ಣನು, ಸತತಂ=ಯಾವಾಗಲೂ, ಅಸ್ಮಾನ್=ನಮ್ಮನ್ನು, ಪಾತು= ರಕ್ಷಿಸಲಿ. ॥ 1 ॥ 2 ॥

**ತಾತ್ಪರ್ಯ** ॥ ವಾಮನರೂಪಿಯಾದ ಶ್ರೀಹರಿಯು ಬಲಿಚಕ್ರವರ್ತಿಯ ಹತ್ತಿರ ಮೂರು ಪಾದಗಳನ್ನು ಇಡುವುದಕ್ಕಾಗಿ ಭೂಮಿಯನ್ನು ಬೇಡಿದನು; ಬಲಿಚಕ್ರವರ್ತಿಯು ಒಪ್ಪಿದೊಡನೆಯೆ ವಾಮನನು ತ್ರಿವಿಕ್ರಮಾವತಾರವನ್ನು ತಾಳಿ 1 ಪಾದದಿಂದ ಇಡೀ ಭೂಮಂಡಲವನ್ನೂ, ಮತ್ತೊಂದು ಪಾದದಿಂದ ಇಡೀ ಆಕಾಶವನ್ನೂ ವ್ಯಾಪಿಸಿದನು. ಆಗ ಬ್ರಹ್ಮಾಂಡ ಭಾಂಡಕಟಾಹವು ಒಡೆದು ಸ್ವರ್ಗಂಗೆಯು ಪಾದತಲವನ್ನು ವ್ಯಾಪಿಸಿತು. ಈ ಪ್ರಕಾರ ವಾಮನ ತ್ರಿವಿಕ್ರಮಾವತಾರಗಳನ್ನು ಮಾಡಿರುವವನೂ, ಹೆಚ್ಚು ಪರಾಕ್ರಮವುಳ್ಳ ಶಕಟಾಸುರನನ್ನು ಸಂಹರಿಸಿದವನೂ, ಕಾಲಿಂಗಸರ್ಪವನ್ನು ನಿಗ್ರಹಿಸಿದವನೂ, ಕಮಲದಳದಂತೆ ಕಣ್ಣುಗಳುಳ್ಳವನೂ, ಅತಿ ನೀಲವಾದ ಮೇಘದಂತೆ ಶ್ಯಾಮವರ್ಣದವನೂ, ಶತ್ರುಗಳನ್ನು ಸಂಹರಿಸಿದವನೂ, ವಾಯುವಿಗೆ ಸಮಾನವಾದ ವೇಗವುಳ್ಳ ಗರುಡವಾಹನನೂ ಆದ ಶ್ರೀಕೃಷ್ಣನು ನಮ್ಮನ್ನು ರಕ್ಷಿಸಲಿ! ಎಂದು ಶ್ರೀಮದಾಚಾರ್ಯರು ಪ್ರಾರ್ಥಿಸಿದರು ॥ 1 ॥ 2 ॥

ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯವಿರಚಿತಾ ಶ್ರೀಕೃಷ್ಣಸ್ತುತಿಃ ಸಂಪೂರ್ಣಾ ॥

॥ ಶ್ರೀಃ ॥

ಈ ಪ್ರಕಾರ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ನಿರ್ಮಿತವಾದ ಶ್ರೀಕೃಷ್ಣಸ್ತುತಿಯು ಸಮಾಪ್ತವಾಯಿತು ॥ ಶ್ರೀಃ ॥

ಸಂಜೀವ ಪರ್ವತೋದ್ಧಾರ ಮಮ ದುಃಖಾನ್ನಿವಾರಯಃ।
ಘೋರಾನುಪದ್ರವಾನ್ಸರ್ವಾನ್ ನಾಶಯಾಕ್ಷಾಸುರಾಂತಕ ॥
ಮರ್ಕಟೇಶ ಮಹೋತ್ಸಾಹ ಸರ್ವಶೋಕವಿನಾಶಕ ।
ಶತ್ರೂನ್ಸಂಹರ ಮಾಂ ರಕ್ಷ ಶ್ರಿಯಂ ದತ್ವಾ ಚ ಮಾಂ ಭರ ॥

